# ಕಾನನ

## ನಿಸರ್ಗದೆಡೆಗೆ ಪಯಣ

ಬಂಡೀಪುರ, ನಾಗರಹೊಳೆ ಕಾಡುಗಳು ಬರ್ಕಗಳ ಸ್ವರ್ಗ..., ಈಗ ಬೇಸಿಗೆ, ಕಾಡೆಲ್ಲ ಒಣಗಿ ಬೋಳಾಗಿ ನಿಂತ್ತಿರುತದೆ. ಇನ್ನೂ ಕಾಡಿನ ಪಕ್ಕದ ಜನ ಬೇಟೆಗಾಗಿಯೋ, ಕಟ್ಟಿಗೆಗಾಗಿಯೋ, ಹುಲ್ಲಿಗಾಗಿಯೋ ಅಥವಾ ಕಾಡಿನ ಉತ್ಪನ್ನ ಶೇಖರಣೆಗಾಗಿಯೋ ಬೆಂಕಿಕಡ್ಡಿ ಗೀರಿದರೆ ಸಾಕು.
ಅಪಾಯದ ಅಂಚಿನಲ್ಲಿರುವ ಬರ್ಕದಂತಹ ಪ್ರಾಣಿಗಳ ಗತಿ ಏನು?.



ಮುಖಪುಟ

ಕ್ರಾಸ್ ಬ್ಯಾಕಾಡ್ ಟ್ರೀ ಫ್ರಾಗ್ – *Roarchestes signatusi*

ಮಾರ್ಚ್ 2017

WILDLIFE
CONSERVATION
GROUP

* ವೈಲ್ಡ್ ಲೈಫ್ ಕನ್ಸರ್ವೇಷನ್ ಗ್ರೂಪಿಗೊಂದು ಹೆಮ್ಮೆಯ ಗರಿ

* ಮಾನವನ ಕಿಚ್ಚು- ಈ ಕಾಡ್ಗಿಚ್ಚು...!

* ಸಮುದ್ರ ಗರಿಕೆ...!

* ಮೊಡಗಳು (ಕವನ)

* ಪ್ರಕೃತಿ ಬಿಂಬ




**ಲೇಖಕ ವೃಂದ**

ವಿಪಿನ್ ಬಾಳಿಗ

ಅಶ್ವಥ .ಕೆ .ಎನ್

ಜೈಕುಮಾರ್ .ಆರ್

ನಂದಕುಮಾರ್ ಹೊಳ್ಳ

ಕಾರ್ತಿಕ್ .ಎ .ಕೆ

**ವಿನ್ಯಾಸ**

ಅಶ್ವಥ .ಕೆ.ಎನ್

**ಮುಖಪುಟ ಛಾಯಾಚಿತ್ರ**

ಕಾರ್ತಿಕ್ .ಎ .ಕೆ

**ಪರಿಷ್ಕರಣೆ**

ಮುರಳಿ .ಎಸ್

ನಾಗೇಶ್ .ಓ .ಎಸ್


ಸಾವಿರಾರು ಸುಂದರ ಚಿಟ್ಟೆಗಳು, ಅವುಗಳ ಮೊಟ್ಟೆಗಳು, ಕಂಬಳಿಹುಳುಗಳು ಕಾಡ್ಗಿಚ್ಚೆಂಬ ರೌದ್ರನರ್ತನಕ್ಕೆ ಸಿಲುಕಿ ಸುಟ್ಟುಭಸ್ಮವಾಗುತ್ತಿವೆ...!



© ಕಾರ್ತಿಕ್ .ಎ .ಕೆ    ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಇತ್ತೀಚಿನ ದಿನಗಳಲ್ಲಿ ನೀವು ಟಿವಿಗಳಲ್ಲಿ ನೋಡಿರಬಹುದು ಅಥವಾ ವೃತ್ತಪತ್ರಿಕೆಗಳ ಮೇಲೆ ಹಾಗೆ ಕಣ್ಣು ಹಾಯಿಸಿರಬಹುದು, ನಮಗೆ ವನ್ಯಜೀವಿಗಳ ದಾರುಣ ಸಾವಿನ ಸುದ್ದಿ, ಅವುಗಳ ಆವಾಸ ನಾಶ ಊಹಿಸಲು ಕೂಡ ಆಗದು. ಆ ಮಟ್ಟದಲ್ಲಿ ನಾವೆಲ್ಲ ಸಾಗಿದ್ದೇವೆ, ಇನ್ನೂ ಸರ್ಕಾರ, ಕೇಳಲೇ ಬೇಡಿ...! ನಮ್ಮ ನಾಡಿನ ಕಾಡುಗಳ ಮೂಲೆ ಮೂಲೆಗಳಲ್ಲಿ ಕಾಡಿಗೆ ಬೆಂಕಿ ಬಿದ್ದಿದೆ. ಮತ್ತೊಂದು ಕಡೆ ಅಭಿವೃದ್ಧಿಯ ಹೆಸರಲ್ಲಿ ಸಾವಿರಾರು ಮರಗಳ ಅನನ ಮಾಡಲು ಹೊರಟ್ಟಿದ್ದೇವೆ, ಜೊತೆಗೆ ರಾಜಕಾರಣಿಗಳು ಮತ್ತು ಅರಣ್ಯ ಇಲಾಖೆಯು ಸಹ ಸಹಾಯಕ್ಕೆ ನಿಂತಿದೆ, ಇದು ನಮ್ಮ ಮಾನವ ಕುಲಕ್ಕೆ ಬಂದ ದೌರ್ಭಾಗ್ಯ ಮತ್ತು ದುರ್ದೈವ...! ಮನುಷ್ಯ ಕುಲ ಬದುಕಿ ಉಳಿಯಬೇಕಾದರೆ ಈ ಕಾಡುಗಳು ಬಹಳ ಮುಖ್ಯ, ಇದು ಯಾಕೋ ನಮ್ಮ ಜನಗಳಿಗೆ ಅರ್ಥವೇ ಆಗುತ್ತಿಲ್ಲ.




# ವೈಲ್ಡ್ ಲೈಫ್ ಕನ್ಸರ್ವೇಷನ್ ಗ್ರೂಪಿಗೊಂದು ಹೆಮ್ಮೆಯ ಗರಿ

ಬಹುತೇಕ ವಾಣಿಜ್ಯ ವ್ಯವಹಾರಗಳಲ್ಲಿ ತೊಡಗಿಕೊಂಡಿರುವ ಬೆಂಗಳೂರಿನಂಥ ಕಾರ್ಪೋರೇಟ್ ನಗರಗಳಲ್ಲಿ ಬಹುತೇಕ ಎಲ್ಲರೂ ದುಡ್ಡಿನ ಹಿಂದೆ ಓಡುವುದು ಸರ್ವೇಸಾಮಾನ್ಯ. ಆದರೆ ಇಂಥ ಜೀವನಶೈಲಿಯ ನಡುವೆಯೂ ಪರಿಸರ ಸಂರಕ್ಷಣೆಗೆ ಕೈ ಜೋಡಿಸುವ ಜನರೂ ಸಹ ನಮ್ಮ ನಡುವಿದ್ದಾರೆ. ಅಂಥ ಸಮಾನ ಮನಸ್ಥಿತಿಯ ಸ್ನೇಹಿತರು 'ವೈಲ್ಡ್ ಲೈಫ್ ಕನ್ಸರ್ವೇಷನ್ ಗ್ರೂಪ್' ಎಂಬ ತಂಡ ಕಟ್ಟಿಕೊಂಡು ಒಂದಷ್ಟು ಪರಿಸರಮುಖಿ ಕೆಲಸಮಾಡಿಕೊಂಡು ಬಂದಿದ್ದೇವೆ.

ಇದೇ ತಂಡದ ಸದಸ್ಯರಲ್ಲಿ ಒಬ್ಬರಾದ **ಕಾರ್ತಿಕ್.ಎ.ಕೆ** ಅವರಿಗೆ ಈ ವರ್ಷದ India Photography Awards: Nature contest - 2016ರಲ್ಲಿ ಮೊದಲ ಬಹುಮಾನ ಬಂದಿದ್ದು, ನಮ್ಮೆಲ್ಲರಿಗೆ ಹೆಮ್ಮೆಯ ವಿಷಯವಾಗಿದೆ. ವೃತ್ತಿಯಲ್ಲಿ ಮೂಲತಃ ಸಾಫ್ಟ್ ವೇರ್ ಉದ್ಯೋಗಿಯಾಗಿರುವ ಕಾರ್ತಿಕ್, ನಿಸರ್ಗ ಹಾಗೂ ವನ್ಯಜೀವಿಗಳ ಬಗ್ಗೆ ಅಪಾರವಾದ ಆಸಕ್ತಿಯನ್ನು ಹೊಂದಿದ್ದಾರೆ. ನಿಸರ್ಗದ ಹಲವಾರು ರಹಸ್ಯಗಳನ್ನು ತಮ್ಮ ಛಾಯಾಗ್ರಹಣದಲ್ಲಿ ಸೆರೆಹಿಡಿಯುವುದೆಂದರೆ ಅವರಿಗೆ ಎಲ್ಲಿಲ್ಲದ ಆಸಕ್ತಿ. ಅದರಲ್ಲೂ ಸರೀಸೃಪ ಹಾಗು ಉಭಯವಾಸಿಗಳಿಗೆ ಇವರ ಹೃದಯದಲ್ಲಿ ವಿಶೇಷ ಸ್ಥಾನವೇ ದೊರೆತಿದೆ.

ನಿಸರ್ಗದ ರಹಸ್ಯ ಮತ್ತು ರಮ್ಯತೆಗಳಲ್ಲಿ ಅವರಿಗಿರುವ ಅದಮ್ಯ ಕುತೂಹಲ, ಅವರನ್ನು ಪಶ್ಚಿಮ ಘಟ್ಟದ ಉದ್ದಗಲದಲ್ಲಿನ ಸರೀಸೃಪ ಹಾಗು ಉಭಯವಾಸಿಗಳನ್ನು ಅನ್ವೇಷಿಸುವಂತೆ ಮಾಡಿದೆ. ಇವರು ಹಲವಾರು ಕಪ್ಪೆಗಳನ್ನು ಹಾಗು ಅವುಗಳ ವಿಭಿನ್ನ ಗುಣಲಕ್ಷಣಗಳನ್ನು ಗುರುತಿಸಿ ದಾಖಲಿಸುತ್ತಾ ಬಂದಿದ್ದಾರೆ.

ಅವರು ಕಪ್ಪೆಗಳ ಗುಣಲಕ್ಷಣಗಳನ್ನು ದಾಖಲಿಸಿರುವ ಚಿತ್ರಗಳಲ್ಲಿ "**Father Calling**" ಚಿತ್ರವೂ ಒಂದಾಗಿದೆ. ಇದರಲ್ಲಿ ಒಂದು ಗಂಡು **Bombay night frog** ಕಪ್ಪೆಯು, ರೆಂಬೆಯ ಮೇಲೆ ಕೂತು, ಹೆಣ್ಣು ಕಪ್ಪೆಯನ್ನು ಕರೆಯುತ್ತಿರುವುದನ್ನು ಕಾಣಬಹುದು.



© Karthik A.K | India Photography Awards

2016 Awards Annual inPA India Photography Awards

## Father Calling

### FIRST PRIZE : MR. KARTHIK A.K

### India Photography Awards - Annual 2016 inPA Nature Contest - Jury Choice

ಈ ಪ್ರಭೇದದ ಕಪ್ಪೆಗಳಲ್ಲಿ ನಾವು ಎಲ್ಲ ಕಪ್ಪೆಗಳಿಗಿಂತ ವಿಭಿನ್ನವಾದ ಸಂತಾನೋತ್ಪತ್ತಿ ಕ್ರಿಯೆಯನ್ನು ನೋಡಬಹುದು. ಮಳೆಗಾಲ ಎಂದರೆ ಜೂನ್- ಸೆಪ್ಟಂಬರ್ ಸಮಯದಲ್ಲಿ ಸಂತಾನೋತ್ಪತ್ತಿ ಕ್ರಿಯೆ ಜರಗುತ್ತದೆ. ಪ್ರತಿಯೊಂದು ಗಂಡೂ ತನ್ನದೇ ಆದ ಸ್ವಂತ ಜಾಗವನ್ನು ಹುಡುಕಿಕೊಂಡು ಕುಳಿತಿರುತ್ತದೆ. ನಂತರ ಸಂತಾನೋತ್ಪತ್ತಿ ಕ್ರಿಯೆಗಾಗಿ ಝರಿಗೆ ಜೋತು ಬಿದ್ದಿರುವ ಎಲೆಯನ್ನೋ ಅಥವಾ ರೆಂಬೆಯನ್ನೋ ಹುಡುಕಿ ಅಲ್ಲಿ ಕೂತು ಹೆಣ್ಣನ್ನು ಮತ್ತೆಮತ್ತೆ ಕರೆಯಲಾರಂಭಿಸುತ್ತದೆ. ಅಕ್ಕಪಕ್ಕದಲ್ಲಿರುವ ಹೆಣ್ಣು ಕಪ್ಪೆಯು ಇದರ ಕೂಗಿಗೆ ಸ್ಪಂದಿಸಿ, ಕರೆಯ ಮೂಲಸ್ಥಳವನ್ನು ಹುಡುಕಿಕೊಂಡು ಹೋಗುತ್ತದೆ. ಗಂಡು ಕಪ್ಪೆಯ ಸ್ಥಳ ತಲುಪಿದ್ದೇ, ಜಾಗವನ್ನು ಪರೀಕ್ಷಿಸಿ ಮೊಟ್ಟೆ ಇಡಲು ಅನುವಾಗುವಂತೆ ಗಂಡು ಕಪ್ಪೆ ಹುಡುಕಿರುವ ಎಲೆ ಅಥವಾ ರೆಂಬೆಯ ಮೇಲೆ ಕೂರುತ್ತದೆ. ಈ ಹೆಣ್ಣುಕಪ್ಪೆಯ ದೇಹದ ಮೇಲೆ ಗಂಡುಕಪ್ಪೆಯು ಬಂದು **'ಡಾರ್ಸಲ್ ಸ್ಟ್ರಾಡಲ್ (dorsal straddle)'** ಎಂಬ ವಿನ್ಯಾಸದಲ್ಲಿ ಕೂರುತ್ತದೆ. ಈ ವಿನ್ಯಾಸದ ಹಾಗೂ ಈ ಕಪ್ಪೆಯ ಈ ಕ್ರಿಯೆಯಲ್ಲಿನ ವಿಶೇಷವೆಂದರೆ, ಎಲ್ಲಾ ಕಪ್ಪೆಗಳಂತೆ ಈ ಕಪ್ಪೆಯು, ಹೆಣ್ಣಿನ ಮೇಲೆ ಬಿಗಿಯಾಗಿ ಅಪ್ಪಿಕೊಂಡು ಕೂರದೇ, ಸಡಿಲವಾಗಿ ಕೂತು ಇನ್ನೇನು ಹೆಣ್ಣು ಕಪ್ಪೆಯು ಮೊಟ್ಟೆ ಇಡುತ್ತದೆ ಎನ್ನುವುದನ್ನು ಆ ಹೆಣ್ಣುಕಪ್ಪೆಯ ಚಿಹ್ನೆಯಿಂದ ಅರಿತು, ಅದರ ದೇಹದ ಮೇಲೆ ವೀರ್ಯವನ್ನು ವಿಸರ್ಜಿಸಿ, ಅಲ್ಲೇ ಪಕ್ಕಕ್ಕೆ ಸರಿದುಬಿಡುತ್ತದೆ. ಇದೇ ಹೊತ್ತಿಗೆ ಕಾದ ಹೆಣ್ಣುಕಪ್ಪೆಯು ತಕ್ಷಣ

ಮೊಟ್ಟೆಯಿಡುತ್ತಿದ್ದಂತೆ, ಅದರ ದೇಹದ ಮೇಲಿಂದ ಹರಿದು ಬರುವ ವೀರ್ಯಾಣುಗಳು ಅವುಗಳನ್ನು ಕೂಡಿ, ಮೊಟ್ಟೆಗಳು ಫಲವತ್ತಾಗುತ್ತವೆ.

ಮೊಟ್ಟೆಗಳನ್ನಿಟ್ಟೊಡನೆ ಹೆಣ್ಣು ಕಪ್ಪೆಯ ಕೆಲಸ ಪೂರ್ಣಗೊಳ್ಳುತ್ತದೆ. ಆದರೆ ಗಂಡಿನ ಚಟುವಟಿಕೆ ಇಷ್ಟಕ್ಕೆ ನಿಲ್ಲದೇ, ಅದೇ ಮೊಟ್ಟೆಗಳ ಪಕ್ಕ ಕುಳಿತು, ಮತ್ತೊಂದು ಹೆಣ್ಣನ್ನು ಕರೆಯಲಾರಂಭಿಸುತ್ತದೆ. ಹೀಗೆ ಒಂದು ಗಂಡು ಕಪ್ಪೆಯು ಸರಿ ಸುಮಾರು ಅರ್ಧ ಡಜನ್ ಅಥವಾ ಅದಕ್ಕಿಂತ ಹೆಚ್ಚು ಮೊಟ್ಟೆಗಳ ಗುಂಪಿಗೆ ತಂದೆಯಾಗುತ್ತದೆ....!!!!

ಸಾಮಾನ್ಯವಾಗಿ ಬೇರೆಲ್ಲ ಪ್ರಭೇದದ ಕಪ್ಪೆಗಳಲ್ಲಿ ಹೆಣ್ಣು ಕಪ್ಪೆಯು ಮೊಟ್ಟೆಯಿಡುವ ಜಾಗವನ್ನು ನಿರ್ಧರಿಸುತ್ತದೆ. ಆದರೆ ಈ ಪ್ರಭೇದದಲ್ಲಿ ಮಾತ್ರ ಗಂಡು ಕಪ್ಪೆ ಮೊಟ್ಟೆಯಿಡುವ ಜಾಗವನ್ನು ನಿರ್ಧರಿಸುವುದರಿಂದ, ಇದು ಬೇರೆಲ್ಲ ಜಾತಿಯ ಕಪ್ಪೆಗಳ ಸಂತಾನೋತ್ಪತ್ತಿ ಕ್ರೀಯೆಗಳಿಗಿಂತ ಅನನ್ಯವಾಗಿದೆ. 12 ರಿಂದ 15 ದಿನಗಳೊಳಗೆ ಒಡೆದ ಮೊಟ್ಟೆಗಳಿಂದ ಮರಿಗಳು ಹೊರಬಂದು ಕೆಳಗೆ ಹರಿಯುತ್ತಿರುವ ಝರಿಗೆ ಬಿದ್ದು ತಮ್ಮ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳುತ್ತವೆ.

ಈ ಬಾಂಬೆ ನೈಟ್ ಫ್ರಾಗ್ ಕಪ್ಪೆಯು ಕಂಡು ಬರುವ ಪ್ರದೇಶ 20000 ಚ.ಕಿ.ಮೀ ಗಿಂತ ಕಡಿಮೆಯಿದ್ದು, ಅದೂ ಪೂರ್ಣವಾಗಿರದೆ ಛಿದ್ರಛಿದ್ರವಾಗಿದೆ. ಅಲ್ಲದೇ ಅರಣ್ಯನಾಶ, ವ್ಯವಸಾಯ, ಮಾಲಿನ್ಯ, ಮಾನವ ಚಟುವಟಿಕೆಗಳಿಗೆ ಸಿಲುಕಿ ಸತ್ವಹೀನವಾಗುತ್ತಾ, ಕಪ್ಪೆಗಳ ಚಟುವಟಿಕೆಗಳ ಮೇಲೆ ಗಾಬರಿಪಡಿಸುವ ವೇಗದಲ್ಲಿ ದುಷ್ಪರಿಣಾಮ ಬೀರುತ್ತಿದೆ.

ಅಪರಾತ್ರಿಯ ವೇಳೆಗಳಲ್ಲಿ, ಸುರಿಯುವ ಮಳೆಯ ನಡುವೆ ಪ್ರಕೃತಿಯ ಇಂಥ ಅದ್ಭುತ ಜೀವಿಗಳನ್ನು, ಅವುಗಳ ಚಟುವಟಿಕೆಗೆ ಯಾವುದೇ ತೊಂದರೆಯಾಗದಂತೆ ಕ್ಯಾಮೆರಾದಲ್ಲಿ ಸೆರೆಹಿಡಿಯುವುದೊಂದು ಸಾಹಸವೇ ಸರಿ.

ಈ ಎಲ್ಲ ಸವಾಲುಗಳ ನಡುವೆಯೂ, ಕಪ್ಪೆಗಳ ಲೋಕದಲ್ಲಿನ ವೈಶಿಷ್ಟ್ಯವನ್ನು ಅದ್ಭುತವಾಗಿ ತಮ್ಮ ಕ್ಯಾಮೆರಾದಲ್ಲಿ ಸೆರೆಹಿಡಿದು, ಪ್ರತಿಷ್ಠಿತ ಸ್ಪರ್ಧೆಯಲ್ಲಿ ಮೊದಲನೆಯ ಬಹುಮಾನ ಗಳಿಸಿರುವ ಕಾರ್ತಿಕ್ ಅವರ ಸಾಧನೆ ಅಭಿನಂದನೀಯ.

ಈ ಕಪ್ಪೆಯ ಅದ್ಭುತ ವೀಡಿಯೊವನ್ನು ನೋಡಲು ಇಲ್ಲಿ ಸ್ಕ್ಯಾನ್ ಮಾಡಿ:



ಮೂಲ: ವಿಪಿನ್ ಬಾಳಿಗ

ಅನುವಾದ: ನಾಗೇಶ್ .ಓ .ಎಸ್



# ಮಾನವನ ಕಿಚ್ಚು–ಈ ಕಾಡ್ಗಿಚ್ಚು

ಬೆಂಕಿಯನ್ನು ಮನುಷ್ಯ ಹೇಗೆ ಕಂಡುಹಿಡಿದದ್ದು? ಯಾವಾಗ ಕಂಡುಹಿಡಿದದ್ದು? ಇದರ ಬಳಕೆಯ ಪ್ರಾರಂಭ ಯಾವಾಗ? ಈ ರೀತಿಯ ಎಲ್ಲ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಬಹಳ ಕಷ್ಟದ ಕೆಲಸವೇ...! ನಮ್ಮ ಬುದ್ಧಿಗೆ ನಿಲುಕುವುದು ಬೆಂಕಿಯ ಹುಟ್ಟು ಆದಿಮಾನವನಿಂದ ಎಂದು. ಆದರೆ ಬೆಂಕಿಯ ಹುಟ್ಟು ಇನ್ನೂ ಹಿಂದೆಯಿಂದಲೂ ಇತ್ತು, ಈ ಭೂಮಂಡಲದ ಮೇಲೆ ಜೀವಿಗಳ ಸೃಷ್ಟಿಗೂ ಮೊದಲೇ ಬೆಂಕಿಬಂದಿದೆ, ಬೆಂಕಿ ಮನುಷ್ಯನಿಗಿಂತಲೂ ಪುರತಾನವಾದದ್ದು. ಭೂಮಿ ಸೃಷ್ಟಿಯಾದದ್ದೇ ಬೆಂಕಿಯ ಉಂಡೆಯಿಂದ ಅಲ್ಲವೆ? ಪ್ರಕೃತಿಯ ರಕ್ಕಸ ಶಕ್ತಿಗಳಾದ ಭೂಕಂಪ, ಜ್ವಾಲಾಮುಖಿ, ಸುಂಟರಗಾಳಿ, ಪ್ರವಾಹ, ಬರಗಾಲದಂತೆಯೇ ಬೆಂಕಿಯೂ ಕೂಡ ಇಡೀ ವಿಶ್ವದ ಜೀವಮಂಡಲವನ್ನು ಅಲ್ಲೋಲ-ಕಲ್ಲೋಲ ಮಾಡಿದೆ. ಈ ನಮ್ಮ ಭೂಮಂಡಲದ ಮೇಲೆ ಬೆಂಕಿ ಬಹುಭೀಕರವಾದ ಇತಿಹಾಸವನ್ನು ಸೃಷ್ಟಿಮಾಡಿದೆ. ಆದಿಮಾನವನ ಯುಗದಿಂದ ಅದರ ಉತ್ಪತ್ತಿ, ಬಳಕೆ ಹಾಗೂ ಅದರ ಕುರುಹುಗಳು ಸಿಗುತ್ತಾ ಹೋಗುತ್ತವೆ.

ಆದಿಮಾನವ ಅಲೆಮಾರಿಯಾಗಿದ್ದ, ಅವನು ಕಾಡುಗಳಲ್ಲಿ ಅಲೆಯುತ್ತಾ ಗೆಡ್ಡೆ-ಗೆಣಸು, ಪ್ರಾಣಿಗಳ ಹಸಿ ಮಾಂಸವನ್ನು ತಿನ್ನುತ್ತಿದ್ದ ಎಂಬುದು ಎಲ್ಲರಿಗೂ ಗೊತ್ತು. ಒಮ್ಮೆ ಅಗ್ನಿ ಪರ್ವತಗಳಿಂದಲೋ, ಸಿಡಿಲುಗಳಿಂದಲೋ ಅಥವಾ ಮರಗಳ ಉಜ್ಜುವಿಕೆಯಿಂದಲೋ ಸ್ವಾಭಾವಿಕವಾಗಿ ಕಾಡಿಗೆ ಬೆಂಕಿ ಬಿದ್ದು ಬೃಹತ್ ಕಾಡು ಸುಟ್ಟು ಕಾಡಿನಲ್ಲಿನ ಪ್ರಾಣಿಗಳು ಅನಾಹುತದಲ್ಲಿ ಸಿಲುಕಿ ಬೆಂದುಹೋದವು, ಆ ಸುಟ್ಟ ಪ್ರಾಣಿಗಳ ಮಾಂಸವನ್ನು ತಿಂದ ಆದಿಮಾನವ ಆ ರುಚಿಗೆ ಮಾರುಹೋಗಿ ಬೆಂಕಿಯನ್ನು ಕಂಡು ಹಿಡಿಯಲು ಮುಂದಾದ, ಆಮೇಲೆ ಕಲ್ಲು ಕಲ್ಲುಗಳಿಗೆ ಉಜ್ಜುವುದರಿಂದ ಬೆಂಕಿಯು ಉತ್ಪತ್ತಿಯಾಗುತ್ತದೆ ಎಂದು ಕಂಡುಕೊಂಡ. ಬರಬರುತ್ತಾ ಮರದ ಕಡ್ಡಿ ಮತ್ತೊಂದು ಕಡ್ಡಿಯ ಮೇಲಿಟ್ಟು ಕಡೆಯುವುದರಿಂದ ಘರ್ಷಣೆಯುಂಟಾಗಿ ಬೆಂಕಿ ಉತ್ಪತ್ತಿಯಾಗುವುದನ್ನು ಕಂಡುಕೊಂಡ. ಕಡ್ಡಿ ಕಡ್ಡಿಗೆ ಉಜ್ಜುವುದರಿಂದ ಉಂಟಾಗುವ ಈ ವಿಧಾನ ಇಂದೂ ಸಹ ಬೋಟ್ಸ್ವಾನ, ನಮೀಬಿಯಾ ಮುಂತಾದ ಆಫ್ರೀಕಾದ ಕೆಲ ದೇಶಗಳಲ್ಲಿ ಕೆಲ ಜನಾಂಗಗಳಲ್ಲಿ ಬಳಕೆಯಲ್ಲಿದೆ.

ಅಗ್ನಿಯ ರೂಪ ಮತ್ತು ಲಕ್ಷಣಗಳು ಸ್ಪಷ್ಟವಾದದ್ದು ರಾಸಾಯನಿಕ ಪ್ರಯೋಗಗಳು ಬಂದ ನಂತರವೇ. ಅದಕ್ಕೂ ಹಿಂದೆ ಸ್ವಾಭಾವಿಕವಾದ ಕಾಡ್ಗಿಚ್ಚುಗಳು ಮಾತ್ರ ಆಗುತ್ತಿದ್ದವೇ ಹೊರತು ಮಾನವ ನಿರ್ಮಿತವಾದ ಬೆಂಕಿ ಇರಲಿಲ್ಲ. ಎಂದು ಈ ಬೆಂಕಿಯನ್ನು ಅತ್ಯಾಧುನಿಕ ವಿಧಾನವನ್ನು ಬಳಸಿ ಬೆಂಕಿ ಕಡ್ಡಿಯನ್ನು ಕಂಡುಕೊಂಡನೋ... ಮಾನವ

ಈ ಜಗವನ್ನೇ ಗೆಲ್ಲಲು ಹೊರಟ...! ಇದು ಒಂದು ರೀತಿ ಬಹಳ ಹಿಂದೆಯೇ ಇದ್ದ ಘರ್ಷಣಾ ವಿಧಾನವನ್ನ ಅನುಸರಿಸಿ ಬೆಂಕಿಕಡ್ಡಿಯನ್ನು ತಯಾರಿಸಿದ. ಚಿಕ್ಕ ಚಿಕ್ಕ ಮರದ ಕಡ್ಡಿಗಳ ತುದಿಯಲ್ಲಿ ರಂಜಕ, ಗಂಧಕ , ಪೊಟ್ಯಾಸಿಯಂ ಕ್ಲೋರೇಟ್ ಮತ್ತು ಜಿಂಕ್ ಆಕ್ಸೈಡ್ ಗಳ ಮಿಶ್ರಣಮಾಡಿ ಕಡ್ಡಿಗಳಿಗೆ ಅಂಟಿಸಿ ಒಣಗಿಸಿ ಈ ಕಡ್ಡಿಗಳನ್ನು ಒಂದು ಒರಟಾಗಿರುವ ವಸ್ತುವಿನ ಮೇಲೆ ಗೀರಿದರೆ ಘರ್ಷಣೆಗೊಂಡು ಕಡ್ಡಿಯ ತುದಿಯಲ್ಲಿ ಬೆಂಕಿ ಬರುತ್ತದೆ. ಇದು ಮನುಷ್ಯನ ಕೈಗೆ ಯಾವಾಗ ಬಂತೋ "ಮಂಗನ ಕೈಲಿ ಮಾಣಿಕ್ಯ" ಬಂದಂತಾಯಿತು. ಎಲ್ಲೆಂದರಲ್ಲಿ ಬೆಂಕಿ ಇಡುವ ಕೆಲಸ ಇಂದಿಗೂ ಬಿಟ್ಟಿಲ್ಲ, ಬಿಡುವುದೂ ಇಲ್ಲ. ಸಣ್ಣ ಪುಟ್ಟ ಕಾರಣಕ್ಕೂ ಕಾಡುಗಳಿಗೆ ಬೆಂಕಿಯಿಡುತ್ತಾ ಬಂದ.



ಇಂದು ಮನುಷ್ಯ ನಾಡಿನ ಎಲ್ಲ ಕಾಡುಗಳಿಗೂ ಬೆಂಕಿಯಿಡುತ್ತಾ ಬಂದಿದ್ದಾನೆ. ಅದಕ್ಕೆ ಕಾರಣಗಳು ನೂರಾರು, ಬೇಸಿಗೆಯಲ್ಲಿ ಕಾಡೆಲ್ಲ ಒಣಗಿ ಬೋಳಾಗಿ ನಿಂತಿರುವಾಗ ದನ-ಕರುಗಳಿಗೆ ಆಹಾರ ಇನ್ನೆಲ್ಲಿ. ಮಳೆ ಬರುವುದು ಇನ್ನೂ ತಡವಾಗುತ್ತದೆ. ಆದರೆ ದನ-ಕರುಗಳಿಗೆ ಮೇವು ಬೇಕಲ್ಲ, ಕಾಡಿಗೆ ಬೆಂಕಿಯಿಟ್ಟು ಸುಟ್ಟು ಭಸ್ಮವಾದ ಒಂದೆರಡು ದಿನಗಳಲ್ಲಿ, ಹುಲ್ಲು ತನ್ನ ಬುಡದಿಂದ ಇಬ್ಬನಿಗೆ ಹೊಸ ಚಿಗುರೊಡೆಯುತ್ತದೆ. ದನಗಳಿಗೆ ಅಲ್ಪ-ಸ್ವಲ್ಪ ಮೇವಾಗುತ್ತದೆ. ಆದರೆ ಆ ಜಾಗದಲ್ಲಿ ಮತ್ತೆ ವರ್ಷಪೂರ್ತಿ ಹುಲ್ಲು ಬೆಳೆಯುವುದಿಲ್ಲ. ಅದು ತಿಳಿಯದ ಕಾಡಿನ ಅಕ್ಕಪಕ್ಕದ ಜನರು ಈ ಕೆಲಸಕ್ಕೆ ಕೈಹಾಕುತ್ತಾರೆ. ಇನ್ನೂ ಕಾಡಿನ ಪಕ್ಕದ ಜನ ಬೇಟೆಗಾಗಿಯೋ, ಕಟ್ಟಿಗೆಗಾಗಿಯೋ, ಹುಲ್ಲಿಗಾಗಿಯೋ, ಕಾಡಿನ ಉತ್ಪನ್ನ ಶೇಖರಣೆಗಾಗಿಯೋ ಅಥವಾ ದನಕಾಯಲು ಹೋದಾಗ ಅರಣ್ಯ ಅಧಿಕಾರಿಗಳ ಧರ್ಪಕ್ಕೆ ಮುಯ್ ತೀರಿಸಿಕೊಳ್ಳಲೋ ಕಾಡಿಗೆ ಬೆಂಕಿಯಿಡುತ್ತಾರೆ.

ಒಮ್ಮೆ ನಾನು ಬನ್ನೇರುಘಟ್ಟ ಕಾಡಿನ ಮಧ್ಯದಲ್ಲಿ ಹಾದುಹೋಗುವ ದಾರಿಯಲ್ಲಿ ಹೊರಟಿದ್ದೆ. ರಸ್ತೆಯ ಪಕ್ಕದಲ್ಲಿಯೇ ಕಾಡಿಗೆ ಬೆಂಕಿಬಿದ್ದಿತ್ತು. ಕಾಡಿನಲ್ಲೇ ಗಸ್ತು ತಿರುಗುವ ಅರಣ್ಯ ಇಲಾಖೆಯವರಿಗೆ ಹೇಳಬೇಕು ಎಂದುಕೊಂಡು ಹೊರಟೆ. ಅಲ್ಲೇ ಮುಂದೆ ರಸ್ತೆಬದಿಯ ಮರದಡಿ ಹತ್ತಾರು ಜನ ಅರಣ್ಯ ರಕ್ಷಕರು ಆರಾಮಾಗಿ ಹರಟುತ್ತಾ ಕುಳಿತಿದ್ದರು. ಗಾಡಿಯನ್ನು ನಿಲ್ಲಿಸಿ ಯಾರೋ ಕಾಡಿಗೆ ಬೆಂಕಿ ಹಾಕಿದ್ದಾರೆ, ಬನ್ನಿ ಬೇಗ ಆರಿಸಿ ಎಂದೆ . ಎಲ್ಲಿ? ಎಂದರು. ಬೆಂಕಿ ಬಿದ್ದಿದ್ದ ಜಾಗ ಹೇಳಿದೆ. "ಹೋ... ಅದಾ, ನಾವೇ ಹಾಕಿದ್ದೀವಿ" ಎಂದರು. ನಾನು ಆಶ್ಚರ್ಯದಿಂದ ಯಾಕೆ? ಎಂದೆ. ನಮ್ಮ್ ಸಾಹೇಬ್ರು ಹೇಳಿದ್ದಾರೆ ಬೇಸಿಗೆ ಬಂತು ಬೇರೆಯಾರಾದ್ರು ಬೆಂಕಿ ಹಾಕ್ಬೇಡ್ತಾರೆ

ಅದಕ್ಕುಂಚೆ ನಾವೇ ಬೆಂಕಿ ಹಾಕಿ ಸುಟ್ಟಾಕ್ಬೇಕಂತೆ" ಎಂದರು. ನನಗೆ ಹುಚ್ಚನಂತೆ ಕೋಪ, ದುಃಖ, ನಗು ಎಲ್ಲವೂ ಒಟ್ಟೊಟ್ಟಿಗೆ ಬಂತು. ಸುಮ್ಮನೇ ಪೇಚಾಡುತ್ತಾ ಮನೆಯ ಕಡೆ ಬಂದೆ.




ಮತ್ತೊಂದು ಸಲ, ಕಾಡಿನ ದಾರಿಯಲ್ಲಿಯೇ ಸಾಗುತ್ತಿದೆ, ಇಡೀ ಕಾಡಿಗೆ ಒಳ್ಳೆಯ ಮರ-ಗಿಡ, ಪೊದೆಯಿರುವ ರಸ್ತೆಯ ಪಕ್ಕ ಇರುವ ಒಂದು ಜಾಗ, ಎಷ್ಟೋ ಸಾರಿ ಆ ಜಾಗದಲ್ಲಿ ಅನೆಗಳು, ಕಾಟಿಗಳು, ಜಿಂಕೆಗಳು ಮುಂತಾದ ಪ್ರಾಣಿಗಳನ್ನು ನೋಡಿದ್ದೇನೆ ಅಂತಹ ಕಾಡು ಜಾಗ ಅದು. ಆ ಬಿರುಬಿಸಿಲ ಬೇಸಿಗೆಗೆ ಕಾಡಿಗೆ ಕಾಡೇ ಹೊತ್ತಿ ಉರಿಯುತ್ತಿತ್ತು. ಹೊಗೆ ದಾರಿಯನ್ನೆಲ್ಲ ಮುಚ್ಚಿತ್ತು. ಬೆಂಕಿಯ ಜ್ವಾಲೆಗಳು ಗಾಳಿಯಲ್ಲಿ ಸೇರಿ ಮುಖಕ್ಕೆ ರಾಚುತ್ತಿತ್ತು. ಸ್ವಲ್ಪ ದೂರಕ್ಕೆ ಮರದ ನೆರಳಲ್ಲಿ ಒಬ್ಬ ಅರಣ್ಯ ರಕ್ಷಕ ನಿಂತಿದ್ದ. ಗಾಡಿಯನ್ನು ನಿಲ್ಲಿಸಿ, "ಏನ್ ಬೆಂಕಿ ಬಿದ್ಬಿಟಿದೆ, ಅಯ್ಯೋ ಬನ್ನಿ ಆರಿಸೋಣ" ಎಂದೆ. "ಏ... ಇಲ್ಲ ಮಾರಾಯ. ಇಲ್ಲಿ ತುಂಬ ಪೊದೆ, ಆನೆ ಜಾಸ್ತಿ ನಿಂತ್ಕೋತವೆ, ಅದಕ್ಕೆ ಈ ಬೇಸ್ಗೆಲಿ ಬೆಂಕಿ ಹಾಕಿ ತೆಳು ಮಾಡಿದ್ರೆ, ಮುಂದಿನ್ ಸಾರಿ ಆನೆ ಇಲ್ಲಿ ನಿಲ್ಲೋದಿಲ್ಲ " ಎಂದ. "ಆನೆ ಕಾಡಲ್ಲಿ ನಿಂತ್ರೆ ನಿಂಗೆನಪ್ಪ ತೊಂದ್ರೆ" ಎಂದೆ. "ಆನೆ ಕಾಡಲ್ಲಿ ಇದ್ರೆ ತಾನೆ ಹೊಲಕ್ಕೆ ಹೋಗೋದು, ರೈತ್ರು ನಮ್ಮೇಲೆ ಜಗಳಕ್ಕೆ ಬರೋದು, ಕಾಡಲ್ಲಿ ಆನೆಗಳು ನಿಲ್ಲೋಕೆ ಜಾಗ ಇಲ್ಲ ಅಂದ್ರೆ, ಕಾಡಲ್ಲಿ ಆನೆ ಎಲ್ಲಿರ್ತವೆ, ಆನೆ ಸಮಸ್ಯೆನೇ ಇರೋದಿಲ್ಲ " ಎಂದ. ಈ ಅರಣ್ಯ ರಕ್ಷಕನ ಕುತಂತ್ರನೋಡಿ ಎಂತದ್ದು. ಅರಣ್ಯ ರಕ್ಷಕರೆ ಭಕ್ಷಕರಾದಾಗ ಕಾಡು ಏನಾಗುತ್ತದೆ ಒಮ್ಮೆ ಯೋಚಿಸಿ...!

ನಿಮಗೆ ನಾಗರಹೊಳೆಯ ಒಂದು ಘಟನೆ ನೆನಪಿರಬೇಕು, ಒಬ್ಬ ನಿಷ್ಕೃಷ್ಟ ಅರಣ್ಯಾಧಿಕಾರಿಯ ನಿಷ್ಠೆಯ ಕೆಲಸಕ್ಕೆ ಕಾಡಿಗೆ ಸ್ಥಳೀಯರೇ ಬೆಂಕಿ ಹಚ್ಚಿ ನೂರಾರು ಹೆಕ್ಟೇರ್ ಅರಣ್ಯ, ಜೀವಿಪ್ರಭೇದವನ್ನು ಬೆಂದು ಕರಕಲಾಗಿಸಿದರು. ಒಂದು ಕಡೆ ಅರಣ್ಯ ರಕ್ಷಕರೆ ಭಕ್ಷಕರಾದರೆ ಮತ್ತೊಂದು ಕಡೆ ದಿಟ್ಟ ಅರಣ್ಯಾಧಿಕಾರಿಗಳ ಮೇಲಿನ ದ್ವೇಷದಿಂದಲೂ ಕೂಡ ಮಾರಕವೇ ಆಗಿದೆ. ಇವನ್ನೆಲ್ಲವನ್ನು ಹಾಗೆ ಗಮನಿಸಿದರೆ ನಮ್ಮ ದೇಶದಲ್ಲಿ ಕಾಡಿಗೆ ಬೆಂಕಿ ಬೀಳಲು ನೂರೆಂಟು ಕಾರಣಗಳಿವೆ. ಎಲ್ಲಾ ಕಾರಣಗಳಿಗೆ ಮೂಲ, ಮಾನವನೆ.

ಈಚೆಗೆ ಬೇಸಿಗೆಯ ತಾಪ ಏರುತ್ತಿದೆ. ಕರ್ನಾಟಕ ರಾಜ್ಯ ನೈಸರ್ಗಿಕ ವಿಪತ್ತು ನಿಗಾ ಕೇಂದ್ರದ (Karnataka State Natural Disaster Monitoring Centre) ಪ್ರಕಾರ ಹೆಸರಾಂತ ಕಾಡುಗಳ ಬೀಡು ಮೈಸೂರು, ಕೊಡಗು, ಮತ್ತು ಚಾಮರಾಜನಗರ ಜಿಲ್ಲೆಗಳ ಕೆಲ ತಾಲ್ಲೂಕುಗಳಲ್ಲಿ ಕಳೆದ ವರ್ಷ ಬರ ಆವರಿಸಿದ್ದು, ಈ ಬಾರಿಯ ಬೇಸಿಗೆಯ ತಾಪ 40°C ಗೆ ಏರಿದೆ. ನಾಗರಹೊಳೆ, ಬಂಡೀಪುರ, ಬಿಳಿಗಿರಿರಂಗಸ್ವಾಮಿ ಬೆಟ್ಟ, ಮಲೆ ಮಹದೇಶ್ವರ ಬೆಟ್ಟ, ಕಾವೇರಿ ವನ್ಯಜೀವಿ ಧಾಮ, ಮತ್ತು ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನಗಳು ಒಣ ಎಲೆಯುದುರುವ ಕಾಡುಗಳು ಜೊತೆಗೆ ಬಹಳಷ್ಟು ಕುರುಚಲು ಪ್ರದೇಶ. ಈ ಬೇಸಿಗೆಯ ಝುಳ-ಝುಳ ಬಿಸಿಲಿಗೆ ಮರಗಳು ತಮ್ಮ

ಎಲೆಗಳನ್ನು ಉದುರಿಸಿವೆ, ಕುರುಚಲು ಗಿಡ, ಹುಲ್ಲುಗಳೆಲ್ಲ ಒಣಗಿ ಅಸ್ತಿಪಂಜರವಾಗಿ ಕಾಡಿಗೆ ಕಾಡೇ ವರುಣನನ ಕಡೆ ನೋಡುತ್ತಿದೆ.

ಈ ವರ್ಷ, 2016 ರಲ್ಲಿ ನೀವು ಟಿವಿಗಳಲ್ಲಿ ನೋಡಿರಬಹುದು ಅಥವಾ ವೃತ್ತ ಪತ್ರಿಕೆಗಳ ಮೇಲೆ ಹಾಗೆ ಕಣ್ಣು ಹಾಯಿಸಿರಬಹುದು, ನಮಗೆ ವನ್ಯಜೀವಿಗಳ ದಾರುಣ ಸಾವಿನ ಸುದ್ದಿ ಅವುಗಳ ಆವಾಸ ನಾಶ ಊಹಿಸಲು ಕೂಡ ಆಗದು. ಆ ಮಟ್ಟದಲ್ಲಿ ನಾವೆಲ್ಲ ಸಾಗಿದ್ದೇವೆ, ಇನ್ನೂ ಸರ್ಕಾರ, ಕೇಳಲೇ ಬೇಡಿ...!, ನಮ್ಮ ನಾಡಿನ ಕಾಡುಗಳ ಮೂಲೆ ಮೂಲೆಗಳಲ್ಲಿ ಕಾಡಿಗೆ ಬೆಂಕಿ ಬಿದ್ದಿರುವ ಸುದ್ದಿಯನ್ನು ನೀವು ಗಮನಿಸಿರಬಹುದು. ಬಂಡೀಪುರ ರಾಷ್ಟ್ರೀಯ ಉದ್ಯಾನವನದ ಮೊಳೆಯೂರು ಅರಣ್ಯ ವಲಯದಲ್ಲಿ ಬೆಂಕಿಯ ಕೆನ್ನಾಲಿಗೆಯು ಮುಗಿಲುಮುಟ್ಟಿ, ಹೊಗೆಯ ಕಾರ್ಮೋಡಗಳು ಆಕಾಶವನ್ನು ಕತ್ತಲಾಗಿಸಿತ್ತು, ಕಪ್ಪು ಹೊಗೆಯ ನಡುವೆ ಬೆಟ್ಟದೆತ್ತರ ಜ್ವಾಲಾಮುಖಿಯಂತೆ ಉರಿವ ಬೆಂಕಿ ಎಲ್ಲೋ ವೇಗವಾಗಿ ಆರ್ಭಟಿಸಿ ದೂರಕ್ಕೆ ಚಲಿಸುವ ಕಾತರದಲ್ಲಿತ್ತು, ಕೋಟ್ಯಾಂತರ ಮರ-ಗಿಡ, ಜೀವಿಗಳ ಜೊತೆ **ಅರಣ್ಯ ರಕ್ಷಕ ಮುರೆಗಪ್ಪ**ನ ಪ್ರಾಣವನ್ನು ಕೊಂಡುಯ್ದಿತ್ತು. ಮೊಳೆಯೂರು, ಕಲ್ಕೆರೆ, ಎನ್.ಬೇಗೂರು ಮತ್ತು ಗುಂಡ್ರೆ ವಲಯಗಳಲ್ಲಿ ನೂರಾರು ಎಕರೆ ಅರಣ್ಯ ಸುಟ್ಟು ಭಸ್ಮವಾಯಿತು. ಬಂಡೀಪುರ ಕಾಡಿನ ಇನ್ನೊಂದು ಕಡೆ ಮಂಗಲ ಜಲಾಶಯದ ಮೂಲಪುರ ಪ್ರದೇಶಗಳಲ್ಲಿ 500 ರಿಂದ 600 ಎಕರೆ ಕಾಡು ನಾಶವಾಯಿತು. ಇನ್ನು ನಾಗರಹೊಳೆ ರಾಷ್ಟ್ರೀಯ ಉದ್ಯಾನವನವೇನೂ ಈ ಜ್ವಾಲೆಯಿಂದ ಹೊರತಾಗಿಲ್ಲ...! ಮತ್ತಿಗೋಡು ವಲಯದಲ್ಲಿ ಕಾಡ್ಗಿಚ್ಚಿಗೆ ಮರ-ಗಿಡಗಳು, ಔಷಧ ಸಸ್ಯಗಳು, ಸರಿಸೃಪ-ಉಭಯವಾಸಿಗಳು ಮತ್ತು ಆನೇಕ ಪ್ರಾಣಿ-ಪಕ್ಷಿಗಳು ಬಲಿಯಾಗಿವೆ ಸುಮಾರು ನೂರಾರು ಎಕರೆ ಅರಣ್ಯ ಪ್ರದೇಶವನ್ನು ಕಾಡ್ಗಿಚ್ಚು ತನ್ನ ತೆಕ್ಕೆಗೆ ಸಿಲಿಕಿಸಿಕೊಂಡಿದೆ.




ಇನ್ನು ಮಂಡ್ಯ ಜಿಲ್ಲೆಯ ಕಡೆ ನೋಡಿದರೆ ಮದ್ದೂರು ತಾಲ್ಲೂಕಿನ ಮಾರದೇವನಹಳ್ಳಿ ಗ್ರಾಮದ ಅರಣ್ಯದಲ್ಲಿ ಕಾಣಿಸಿಕೊಂಡ ಬೆಂಕಿ ಸುಮಾರು 400 ಎಕರೆ ಅರಣ್ಯ-ಹುಲ್ಲುಗಾವಲು ಪ್ರದೇಶ ಬೆಂಕಿಗೆ ಆಹುತಿಯಾಗಿಸಿದ್ದು, ಲಕ್ಷಾಂತರ ರೂಪಾಯಿ ಮೌಲ್ಯದ ಹೊನ್ನೆ, ಸಿಲ್ವಾರ್, ನೀಲಗಿರಿ ಸೇರಿದಂತೆ ನಾನಾ ಬಗೆಯ ಮರಗಳ ಜೊತೆಗೆ

ಜೀವಿಗಳು ಸುಟ್ಟುಹೋಗಿದೆ. ಉತ್ತರ ಕರ್ನಾಟಕ ಗದಗ ಜಿಲ್ಲೆಯ ಕಪ್ಪತಗುಡ್ಡ ಶ್ರೇಣಿಯ ತಪ್ಪಲಿನಲ್ಲಿ ಬೆಂಕಿ ಸುಮಾರು 12 ಎಕರೆ ಅರಣ್ಯ ಪ್ರದೇಶವನ್ನು ಸುಟ್ಟು ಕರಕಲಾಗಿಸಿದೆ. ಅಪರೂಪದ ಔಷಧ ಸಸ್ಯಗಳು ಬೆಂಕಿಗೆ ಶರಣಾಗಿ ಹೋಗಿವೆ.

ಮತ್ತೆ ಜಗತ್ತಿನ ಅತಿ ಸೂಕ್ಷ್ಮ ಜೈವಿಕ ತಾಣಗಳ ಪಟ್ಟಿಯಲ್ಲಿರುವ ಪಶ್ಚಿಮಘಟ್ಟದ ಕೊಲ್ಲೂರು ಮೂಕಾಂಬಿಕಾ ಅಭಯಾರಣ್ಯ, ಕೊಡಗಿನ ಆನೆಕಾಡು ಮತ್ತು ಕಲ್ಲೂರುಬೆಟ್ಟ ಮೀಸಲು ಅರಣ್ಯದಲ್ಲಿ ಕಾಳ್ಗಿಚ್ಚು ತೀವ್ರ ಸ್ವರೂಪ ಪಡೆದುಕೊಂಡು ಕಾಡಿಗೆ ಕಾಡೇ ಉರಿದುಹೋಗಿದೆ.





ಒಮ್ಮೆ ಯೋಚಿಸಿ, ನಿಮ್ಮದೇ ಕುಟುಂಬದ ಯಾರಿಗಾದರೂ ಒಬ್ಬರಿಗೆ ಯಾರೋ ಬೆಂಕಿಹಾಕಿ ಸುಟ್ಟರೆ...! ಅಥವಾ ನಮ್ಮ ಮನುಕುಲದಲ್ಲಿ ಗಂಡನ ಮನೆಕಡೆಯಿಂದ ವರದಕ್ಷಿಣೆಯಂತಹ ಕಿರುಕುಳಕ್ಕೆ ಒಳಗಾದ ಒಬ್ಬ ಮಹಿಳೆ ನಮ್ಮ ಕುಟುಂಬದ ಅಮ್ಮನೋ, ಅಕ್ಕನೋ, ತಂಗಿಯೋ ಆಗಿ ಕೊನೆಗೆ ಸೀಮೆ ಎಣ್ಣೆ ಸುರಿದು ನಮ್ಮ ಕಣ್ಮುಂದೆಯೇ ಬೆಂಕಿಹಾಕಿ ಸುಟ್ಟು ಹಾಕುತ್ತಿರುವಾಗ ನಮಗೇನು ಅನಿಸುತ್ತದೆ? ನಿಮ್ಮ ಮನದಲ್ಲಿ, ಹೃದಯದಲ್ಲಿ ಏನಾಗುವುದು ಕಲ್ಪಿಸಿಕೊಳ್ಳಿ... ಅದನ್ನು ಊಹಿಸಿಕೊಳ್ಳಲು ಸಹ ಆಗುವುದಿಲ್ಲ...! ಆದರೆ ನಮ್ಮ ತಾಯಿಯಾಗಿರುವ ಪ್ರಕೃತಿಮಾತೆಗೆ ಬೆಂಕಿಹಾಕಿ ಸುಡುವುದು ಎಂತಹ ಹೀನ ಕೃತ್ಯ. ಈ ಬೆಂಕಿಯಿಂದ ಆಗುವ ಹಾನಿ ಕಡಿಮೆ ಏನು! ಅದು ಅಪಾರವಾದದ್ದು. ಅಗಾಧ ಅರಣ್ಯ ಸಂಪತ್ತು, ಬೃಹತ್ ಮರಗಳು, ಔಷಧೀಯ ಸಸ್ಯಗಳು, ಗಿಡ-ಮೂಲಿಕೆಗಳು, ಬಳ್ಳಿಗಳು, ಅಣಬೆ, ಆರ್ಕಿಡ್ಗಳು, ಅಸಂಖ್ಯ ವನ್ಯಜೀವಿಗಳಾದ ಕಿರುಸ್ತನಿಗಳು, ಹಾವು, ಕಪ್ಪೆ, ಪಕ್ಷಿಗಳು, ಮಣ್ಣೊಳಗಿನ ಇರುವೆಗಳು, ಸಿಕಾಡಾ, ಜೇನು, ಮೃದ್ವಂಗಿಗಳು ಅಷ್ಟ ಇಷ್ಟ ಅದನ್ನು ಊಹಿಸಲು

ಕೂಡ ನಿಲುಕದು. ಈ ಕಾಡು, ಪ್ರಾಣಿ-ಪಕ್ಷಿ, ಕೀಟ ಕೋಟ್ಯಾದಿಗಳನ್ನು ಕೂಡ ನಮ್ಮ ಕುಟುಂಬದ ಒಬ್ಬ ಸದಸ್ಯರಂತೆ ಒಮ್ಮೆ ನೋಡಿ, ಯೋಚಿಸಿ... ಅಬ್ಬ ಎಂಥ ಬೇಸರವಾಗುತ್ತೆ ಅಲ್ವ...!?.



ಕಾಡ್ಗಿಚ್ಚಿನಿಂದ ವಾಯುಮಂಡಲಕ್ಕೆ ಅಪಾರ ಪ್ರಮಾಣದ ಇಂಗಾಲ ಡೈಆಕ್ಸೈಡ್ ಸೇರಿ ಭೂಮಿಯ ಉಷ್ಣತೆಯನ್ನು ಹೆಚ್ಚುಮಾಡುತ್ತದೆ. ನಿಮಗೆ ಗೊತ್ತಿರಬಹುದು ಕಾಡ್ಗಿಚ್ಚುಗಳು ಶೇಕಡಾ 20 ರಷ್ಟು ಜಾಗತಿಕ ತಾಪಮಾನ ಹೆಚ್ಚಾಗಲು ಕಾರಣವಾಗಿದೆ. ಈಗಾಗಲೆ ಎಲ್ಲೋ ದೂರದ ಧ್ರುವಗಳಲ್ಲಿನ ಹಿಮ ಕರಗಿ ಸಮುದ್ರದ ಮಟ್ಟ ಹೆಚ್ಚಿ ಹಲವಾರು ದೇಶಗಳಿಗೆ ಕಂಟಕ ಬಂದೊದಗಿದೆ. ಆ ದೂರದ ಧ್ರುವಗಳಲ್ಲಿನ ಹಿಮಕರಡಿ, ಆರ್ಕ್ಟಿಕ್ ನರಿ, ಆರ್ಕ್ಟಿಕ್ ಮೊಲ, ಹಿಮ ಸಾರಂಗ, ನೀರು ನಾಯಿ, ಪೆಂಗ್ವಿನ್, ಹಿಮಗೂಬೆ ಮತ್ತು ಕಡಲ ಸಿಂಹ ಮುಂತಾದ ಜೀವಿಗಳು ನೆಲೆಯನ್ನು ಕಳೆದುಕೊಳ್ಳುತ್ತಿರುವುದಕ್ಕೆ ಈ ಕಾಡ್ಗಿಚ್ಚುಗಳು ಸಹ ಕಾರಣವಾಗಿವೆ.

ನಾನು ಕೂಡ ಅರಣ್ಯ ಇಲಾಖೆಯ ಜೊತೆ ಕಾಡ್ಗಿಚ್ಚನ್ನು ಹಾರಿಸಲು ಹೋಗಿದ್ದೇನೆ. ಅದರ ಕಷ್ಟ ಬೇರೊಂದಿಲ್ಲ . ಕಾಡಿನಲ್ಲಿನ ಹುಲ್ಲು, ಒಣಗಿ ನಿಂತಿರುವ ಲಂಟಾನ, ತರಗೆಲೆ, ಯುಪಟೋರಿಯಂ ಮತ್ತು ಮರವೆಂಬ ಬಹುಮುಖ್ಯ ಇಂಧನ ಮುಗಿಯುವರಿಗೂ ಅಥವಾ ನಂದಿಸುವಷ್ಟರಲ್ಲಿ ಮರುಜನ್ಮವೇ ಬಂದಂತಾಗುತ್ತದೆ. ಬೆಂಕಿಯ ರೌದ್ರನರ್ತನದ ಎದುರು ಹಸಿಸೊಪ್ಪು ಹಿಡಿದು ಬೆಂಕಿಗೆ ಬಡಿಯುವುದು, ನೀವೆ ಯೋಚಿಸಿ!. ಅದೆಂತ ಕಷ್ಟ, ಬೆಂಕಿ ನಿರೋಧಕ ಕವಚಗಳಿಲ್ಲ, ತಲೆಗೆ ಹಾಕಿಕೊಳ್ಳಲು ಹೆಲ್ಮೆಟ್ಟಳಿಲ್ಲ, ಉಸಿರುಗಟ್ಟುವಿಕೆ ಆಮ್ಲಜನಕದ ಸಿಲಿಂಡರ್ ಗಳಿಲ್ಲ, ನಮ್ಮಲ್ಲಿನ ಕನಿಷ್ಠ ಕಾಡನ್ನು ಉಳಿಸಲು ಹೆಚ್ಚಿನ ಫೈರ್ ವಾಚರ್ ಗಳೇ ಇಲ್ಲ. ಇರುವ ವಾಚರ್ ಗಳಿಗೆ ಸೂಕ್ತ ತರಭೇತಿಯೇ ಇಲ್ಲ ಇನ್ನೆಲ್ಲಿ ಬೆಂಕಿಯ ಮುಂದೆ ಕಿಂದರಿ ಬಾರಿಸುವುದು. ಇಡೀ ಕಾಡೇ ಬೇಸಿಗೆಯಲ್ಲಿ ಆ ಸುಡುಬಿಸಿಲು ಜೊತೆಗೆ ಜ್ವಾಲಮುಖಿಯಂತೆ ಉರಿಯುತ್ತಿರುವ ಬೆಂಕಿ, ಬೀಸುವ ಗಾಳಿ ಸ್ವಲ್ಪ ಹೆಚ್ಚಾದರೆ ಅದು ಬೆಂಕಿಯನ್ನು ಇನ್ನಷ್ಟು ಕೆರಳಿಸುತ್ತದೆ. ಅಂತಹವುದರಲ್ಲಿ ಸ್ವಲ್ಪ ಮೈಮರೆತರೂ ಸುಟ್ಟು ಕರಕಲಾಗಿಹೋಗುತ್ತೇವೆ. ಮೊನ್ನೆ ಅರಣ್ಯ ರಕ್ಷಕ ಮುರೆಗಪ್ಪನ ಸಾವು ಕಂಡಿದ್ದು ಹೀಗೆಯೇ.



ಇಂದು ನಮ್ಮ ನಾಡಿನಲ್ಲಿ ಕಾಡ್ಗಿಚ್ಚಿನಿಂದ ಆದ ನಷ್ಟವನ್ನು ಯಾರು ಅಂದಾಜು ಮಾಡುತ್ತಿಲ್ಲ, ಸಂಶೋಧನೆಗಳನ್ನು ಕೈಗೊಳ್ಳುತ್ತಿಲ್ಲ. ವರ್ಷದಿಂದ ವರ್ಷಕ್ಕೆ ಕಾಡುಗಳಿಗೆ ತಗಲುವ ಬೆಂಕಿ ಏರುತ್ತಿದೆ. ಸಾವಿರಾರು ಹೆಕ್ಟೇರ್ ಕಾಡುಗಳು ಸುಟ್ಟು ಭಸ್ಮವಾಗುತ್ತಿವೆ. ಕೋಟ್ಯಾಂತರ ಜೀವಪ್ರಭೇದಗಳು ನಿರ್ನಾಮವಾಗುತ್ತಿವೆ. ನಿಸರ್ಗದಲ್ಲಿನ ಲೆಕ್ಕಾಚಾರಗಳೆಲ್ಲ ತಲೆಕೆಳಗಾಗುತ್ತಿವೆ. ಅವುಗಳ ನಷ್ಟ, ಕಾಡ್ಗಿಚ್ಚುಗಳಿಂದಾಗುತ್ತಿರುವ ಪರಿಸರದಲ್ಲಿನ ಅಸಮತೋಲನೆ ಮುಂತಾದವುಗಳ ಬಗ್ಗೆ ಸಂಶೋಧನೆಗಳು ನಡೆಯಬೇಕಾಗಿದೆ.

ಕಾಡ್ಗಿಚ್ಚುಗಳನ್ನು ನಂದಿಸಲು ನಾವು ಉಪಯೋಗಿಸುತ್ತಿರುವ ಪದ್ಧತಿ ಸಾಂಪ್ರದಾಯಿಕವಾದದ್ದು. ವೈಜ್ಞಾನಿಕ ಹೊಸ ಪದ್ಧತಿಗಳ ಕಡೆ ನಮ್ಮ ಅರಣ್ಯ ಇಲಾಖೆ ಗಮಹರಿಸಬೇಕಾಗಿದೆ. ಅಗ್ನಿಶಾಮಕ ದಳ, ಪೊಲೀಸ್ ಇಲಾಖೆ ಮತ್ತು ಮಿಲಿಟರಿಗಳನ್ನು ಸಹಾಯಕ್ಕೆ ತೆಗೆದುಕೊಳ್ಳಬೇಕು ಅನಿಸುತ್ತದೆ. ಜೊತೆಗೆ ಹೆಲಿಕಾಪ್ಟರ್ ಗಳನ್ನು ಬಳಸಿ ಬೆಂಕಿ ನಿರೋಧಕ ರಾಸಾಯನಿಕ ಸಿಂಪಡಿಸಿ ಕಾಡ್ಗಿಚ್ಚನ್ನು ನಂದಿಸುವುದು, ಅರಣ್ಯ ರಕ್ಷಣೆಗೆ ಆಧುನಿಕ ಯಂತ್ರೋಪಕರಣಗಳನ್ನು ಬಳಸುವುದು, ಅರಣ್ಯ ಸಿಬ್ಬಂದಿಗಳಿಗೆ ಬೆಂಕಿ ನಿರೋಧಕ ಜಾಕೆಟ್, ಬೆಂಕಿ ನಿರೋಧಕ ಬಟ್ಟೆಗಳು, ಆಮ್ಲಜನಕದ ಸಿಲಿಂಡರ್, ಮೆಡಿಕಲ್ ಕಿಟ್ ಮತ್ತು ಬೆಂಕಿ ನಂದಿಸುವ ಉಪಕರಗಳನ್ನು ನೀಡಬೇಕು, ಸಿಬ್ಬಂದಿಗಳಿಗೆ ಸಮಯಕ್ಕೆ ಕುಡಿಯಲು ನೀರು, ಊಟೋಪಚಾರ ಮುಂತಾದವುಗಳ ಪೂರೈಕೆ ಸಮರ್ಪಕವಾಗಿರಬೇಕು. ಜೊತೆಗೆ ಅವಶ್ಯಕತೆ ಒದಗಿದಲ್ಲಿ ಆಸಕ್ತ NGO ಮತ್ತು ಸ್ವಯಂ ಸೇವಕರುಗಳ ಸಹಾಯ ಬಹಳ ಪಡೆಯಬೇಕು ಮತ್ತು ಬೇಸಿಗೆಯ ಸಮಯದಲ್ಲಿ ವಿಶೇಷವಾಗಿ ನಿಗಾವಹಿಸಬೇಕು, ಅರಣ್ಯ ಸಿಬ್ಬಂದಿಗಳು

ರಾತ್ರಿ ಹಗಲು ಎನ್ನದೆ ಗಸ್ತುತಿರಗಬೇಕು, ಕಾವಲು ಗೋಪುರಗಳಲ್ಲಿ ಕುಳಿತು ಸದಾ ಇಡೀ ಕಾಡನ್ನು ಗಮನಿಸುತ್ತಿರಬೇಕು ಜೊತೆಗೆ ದೂರಸಂವೇದಿ ತಂತ್ರಜ್ಞಾನವನ್ನು ಸೂಕ್ತವಾಗಿ ಬಳಸಿಕೊಳ್ಳಬೇಕು. ಈಗಾಗಲೇ ಈ ತಂತ್ರಜ್ಞಾನ ನಮ್ಮ ಭಾರತದಲ್ಲಿ ಇದೆ. ಅರಣ್ಯ ಇಲಾಖೆಯು ರಾಷ್ಟ್ರೀಯ ದೂರಸಂವೇದಿ ಪ್ರಾಧಿಕಾರದ ಜೊತೆಸೇರಿ ಉಪಗ್ರಹ ಚಿತ್ರಗಳ ಮೂಲಕ ಕಾಡ್ಗಿಚ್ಚುಗಳನ್ನು ಪತ್ತೆ ಹಚ್ಚಿ ನಿಂಯತ್ರಿಸುವ ವ್ಯವಸ್ಥೆಗಳನ್ನು ಕೈಗೊಳ್ಳಬೇಕಾಗಿದೆ.

ಬೆಂಕಿ ಬಿದ್ದ ಮೇಲೆ ಏನೆಲ್ಲ ಮಾಡಿದರೆ ಏನು ಪ್ರಯೋಜನ, ಅದಕ್ಕೂ ಮುಂಚೆ ಏನಾದರೂ ಮಾಡಬೇಕಲ್ಲ. ಇದು ಬಹಳ ಮುಖ್ಯವಾದ ಅಂಶ. ಕಾಡ್ಗಿಚ್ಚು ಮತ್ತು ಅದರ ಪರಿಣಾಮಗಳ ಕುರಿತ ಬಗ್ಗೆ ಕಾಡಿನ ಅಕ್ಕಪಕ್ಕದಲ್ಲಿ ನೆಲೆಸಿರುವ ಊರುಗಳಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳು ಮಾಡುವುದು. ಈ ಕೆಲಸ ಅರಣ್ಯ ಇಲಾಖೆಗೆ ಕಷ್ಟದ ಕೆಲಸವೇ!?. ಕಾಡಿನ ಅಕ್ಕಪಕ್ಕದಲ್ಲಿನ ಜನಗಳ ಜೊತೆ ಸಾಮರಸ್ಯದ ಕೊರತೆ ಸದಾ ಇದ್ದೇ ಇರುತ್ತೆ ನೋಡಿ!, ಆದರೂ ಸಂಘಸಂಸ್ಥೆಗಳನ್ನು ಸೇರಿಸಿಕೊಂಡು ಮಾಡಲೇಬೇಕಾಗುತ್ತದೆ. ಇದಕ್ಕಿಂತಲೂ ಬಹಳ ಮುಖ್ಯವಾದ ಮತ್ತೊಂದು ಅಂಶವೆಂದರೆ. ಈಗಿನ ಜನಗಳಿಗೆ ಅರಿವು, ಬುದ್ಧಿ, ತಿಳುವಳಿಕೆ ಇವೆಲ್ಲ ಹತ್ತುವುದಿಲ್ಲ. ಅದರ ಬದಲು ಮುಂದಿನ ಪೀಳಿಗೆಯವರಿಗಾದರೂ ಅಂದರೆ ಈಗಿನ ಮಕ್ಕಳಿಗಾದರು ಈ ಅರಿವು ಮೂಡಿಸುವ ಕಾರ್ಯವಾಗಬೇಕು. ಹೇಗೆ? ಮಕ್ಕಳಿಗೆ ಶಿಕ್ಷಣ ವ್ಯವಸ್ಥೆಯ ಪಠ್ಯಪುಸ್ತಕಗಳಲ್ಲಿಯೇ ಕಾಡ್ಗಿಚ್ಚು ಮತ್ತು ಅದರ ಪರಿಣಾಮಗಳ ಬಗ್ಗೆ ಬರಬೇಕು ಜೊತೆಗೆ ಅರಣ್ಯ ಇಲಾಖೆ ಮಕ್ಕಳಿಗೆ ಅರಿವು ಕಾರ್ಯಕ್ರಮಗಳನ್ನು ತಪ್ಪದೆ ಮಾಡುವುದರಿಂದ ಮಾತ್ರ ಈ ರೀತಿಯ ಸಮಸ್ಯೆಗಳನ್ನು ಶಾಶ್ವತವಾಗಿ ತಡೆಗಟ್ಟಬಹುದು.



- ಅಶ್ವಥ .ಕೆ .ಎನ್





# ಸಮುದ್ರ ಗರಿಕೆ...!

ಆ...ಮಧ್ಯಾಹ್ನ ಇನ್ನೂ ಕ್ಲಾಸ್ ಮುಗಿಯೋ ಮುಂಚೆಯೇ ನಾನು ನನ್ನ ಸ್ನೇಹಿತನೂ ಎದ್ದು ಹೊರ ಬಂದು, ಕಾಲೇಜಿನಿಂದ ಹೊರಟು ರಾಮನಗರದ "ಬಿ ಸಿ ಎಮ್" ಹಾಸ್ಟೆಲ್ ಹಿಂದೆಯೇ ಇರುವ ನಮ್ಮ ರೂಮಿನ ಕಡೆ ನಮ್ಮ ಪ್ರಯಾಣ ಪ್ರಾರಂಭವಾಯಿತು. 'ರಾಮನಗರ' ಮತ್ತು 'ಮಧ್ಯಾಹ್ನ' ಇವೆರಡು ಪದಗಳೆಂದರೆ ಸಾಕು ತುಂಬಾ ಬಿಸಿಲು ಎಂದರ್ಥ. ಅದು ಸಾಲದು ಎಂಬಂತೆ ನಮ್ಮ ಕಾಲೇಜ್ ನಿಂದ ರಸ್ತೆಗೆ ಬರಲು ಸುಮಾರು ಅರ್ಧ ಕಿ.ಮೀ ಬೇರೆ ನಟರಾಜ ಸರ್ವಿಸ್ ಮಾಡಲೇಬೇಕಿತ್ತು. ಅಲ್ಲಿಗೆ....! ಬೆಳಿಗ್ಗೆ ತಿಂದು ಬಂದಿದ್ದ ಇಡ್ಲಿ, ಪೂರಿ, ಚಿತ್ರಾನ್ನ ಎಲ್ಲವೂ ಸಹ ನೆನ್ನೆ ಯಾವಾಗಲೋ ತಿಂದೆನೇನೋ ಅನ್ನೋ ಹಾಗೆ ಆಗಿರುತ್ತಿತ್ತು. ಹಾಗೋ ಹೀಗೂ ಮಾಡಿ ರಸ್ತೆಗೆ ಬಂದು ಅಲ್ಲಿ ಸ್ವಲ್ಪ ಕಾಯ್ದು ಬಸ್ಸು ಹಿಡಿದು ಕೊನೆಗೂ ರೂಮಿಗೆ ಬಂದೆವು. ಬಂದೊಡನೆ ಕಣ್ಣು ಹುಡುಕಿದ್ದು ನೀರಿನ ಬಾಟ್ಲಿಯನ್ನ, ನನ್ನ ಗ್ರಹಚಾರಕ್ಕೆ ಆಗಲೇ ನೀರು ಬೇರೆ ಖಾಲಿಯಾಗಿತ್ತು. ನಲ್ಲಿಯಲ್ಲಿ ಬರುವ ನೀರು ಕುಡಿಯೋಣ ಎಂದು ನಾನೆಂದರೆ ಚೀ.... ತೂ..... ಅನ್ನೋ ಉದ್ಗಾರಗಳು ಕೇಳಿ ಬಂದವು. ಯಾಕೆಂದರೆ ಮಿ. ಡಿ ಕೆ ಶಿ ಅವರು ಒದಗಿಸಿದ್ದ 1ರೂ ಗೆ 10ಲೀ ಶುದ್ಧ ನೀರು ಅಲ್ಲೂ ಇದ್ದು, ಅದಕ್ಕೆ ಹೊಂದಿಕೊಂಡಿದ್ದ ನಾಲಿಗೆಗೆ 'ನಲ್ಲಿ' ನೀರೆಂದೊಡನೆ ಚೀ.... ತೂ..... ಅನ್ನೋ ಉದ್ಗಾರಗಳು ಏಕೆ ಬಂದವು ಎಂಬುದು ಅರ್ಥಮಾಡಿಕೊಳ್ಳಲು ನನಗೆ ಕೆಲ ಕ್ಷಣಗಳು ಸಾಕಾಗಿದ್ದವು. ಕೊನೆಗೂ ನನ್ನ ಸ್ನೇಹಿತರು 20 ಲೀ ಕ್ಯಾನ್ ಹಿಡಿದು ನೀರು ತರಲು ಹೊರಟೆ ಬಿಟ್ಟರು. ನಾನು ಸಹ ಅವರ ಹಾಗೆ ನಾನು ಸ್ವಲ್ಪ ಶುದ್ಧ ನೀರಿನ ರುಚಿಯ ಜಾಡು ಹಿಡಿದಿದ್ದರಿಂದ ಅವರು ನೀರು ತರುವವರೆಗೂ ಕಷ್ಟ ಪಟ್ಟು ಕಾಯ್ದು ತಂದ ನಂತರವೇ ನೀರು ಕುಡಿದೆವು.

ಸರಿ ಹಾಗಾದರೆ ನಮ್ಮ ಪೀಠಿಕೆಯ ಅಸಲು ವಿಷಯಕ್ಕೆ ಹೋಗೋಣ ಬನ್ನಿ...! ಹಿಂದೆ ಹೇಳಿದ ಹಾಗೆ ಶುದ್ಧ ಕುಡಿಯುವ ನೀರು ಎಷ್ಟು ಪ್ರಾಮುಖ್ಯತೆ ಪಡೆದಿದೆ ಎಂಬುದರ ಒಂದು ಸಣ್ಣ ಉದಾಹರಣೆ ನಾನು ಹೇಳಿದ್ದು. ಶುದ್ಧ ನೀರಿನ ಅವಶ್ಯಕತೆ ಎಷ್ಟಿದೆ ಎಂದು ಮಹಾನಗರಗಳಲ್ಲಿ ಹಾಗೂ ಬಳ್ಳಾರಿಗಳಂತಹ ಪ್ರದೇಶಗಳಲ್ಲಿ ಕೇಳುವ ಮುಂಚೆಯೇ ಉತ್ತರ ಸಿಗುವಂತಾಗಿದೆ. ನಮಗೆ ಹೇಗೋ ಸ್ಥಳೀಯ ಮಹಾನಗರ ಪಾಲಿಕೆ ಹಾಗೂ ಇತರೆ ಯೋಜನೆಯಡಿ ಎಷ್ಟೋ ಕಡೆ ಶುದ್ಧ ಕುಡಿಯುವ ನೀರು ಸಿಗುವಂತಾಗಿದೆ. ಆದರೆ....!!!

ಈ ತರಹದ ತೊಂದರೆಗಳು ಮನುಷ್ಯರಿಗೆ ಮಾತ್ರವೇ? ಬೇರೆ ಸಸ್ಯವರ್ಗ ಅಥವಾ ಪ್ರಾಣಿವರ್ಗಕ್ಕೂ ಇದೆಯೇ? ಖಂಡಿತ ಇದೆ. ಅದೂ ಸಹ ನಮ್ಮ ಕೊಡುಗೆಯೇ. ಹೇಗೆ? ಅಂತೀರಾ... ನಮ್ಮ ಮಹಾನಗರಗಳ ಚರಂಡಿಗಳ ತ್ಯಾಜ್ಯ ಹಾಗೂ ಅಲ್ಲಿನ ದೊಡ್ಡ ದೊಡ್ಡ ಕಾರ್ಖಾನೆಗಳ ತ್ಯಾಜ್ಯಗಳು ಎಲ್ಲಿ ಹೋಗುತ್ತವೆ? ಎಲ್ಲಾ ಸಮೀಪದ ಕೆರೆ, ನದಿ, ಸಮುದ್ರಗಳಿಗೇ ತಾನೇ? ಹಾಗಾದರೆ ಅಲ್ಲಿನ ಎಷ್ಟೋ ಕೋಟ್ಯಾಂತರ ಜೀವ ವೈವಿಧ್ಯದ ಗತಿ ಏನು?



ಮನುಷ್ಯನ ಇಂತಹ ಎಷ್ಟೋ ಕೃತ್ಯಗಳು ವರ್ಷಾನುಗಟ್ಟಲೆಗಳಿಂದ ನಡೆದು ಬರುತ್ತಿದೆ ಒಂಥರಾ ಅದೇ ಸಂಸ್ಕೃತಿಯಾಗಿಬಿಟ್ಟಿದೆ, ಅಂದರೆ ಮುಂದಿನ ಪೀಳಿಗೆಯು ಹೀಗೆ ಮುಂದುವರೆಸಿಕೊಂಡು ಹೋಗಬಹುದು..! ಇವನ್ನೆಲ್ಲ ಅರಿತು ಸರಿ ಪಡಿಸಿಕೊಳ್ಳಲು ಎಷ್ಟೋ ಅವಕಾಶಗಳಿದ್ದರೂ ಏಳದ ನಮ್ಮನ್ನು ಕಂಡು ನಿಸರ್ಗವೇ ಇದಕ್ಕೊಂದು ಮಾರ್ಗ ಕಂಡುಕೊಂಡಿದೆ.

ಏನದು..??

ನಮ್ಮ ಈ ಬಾರಿಯ ವಿ ವಿ ಅಂಕಣ ದ ಶೀರ್ಷಿಕೆಯಂತೆ ಸಮುದ್ರದಲ್ಲಿನ ಇಂತಹ ಚರಂಡಿ ತ್ಯಾಜ್ಯಗಳನ್ನು ಒಂದು ಜಾತಿಯ ಸಮುದ್ರದಲ್ಲಿ ಬೆಳೆಯುವ ಹುಲ್ಲು ವಿಭಜಿಸಿ ಸಮುದ್ರ ತೀರದಲ್ಲಿನ ನೀರನ್ನು ಆದಷ್ಟು ಶುಚಿಯಾಗಿಡುತ್ತದೆಯಂತೆ. ನಮಗೆ ತಿಳಿದ ಹಾಗೆ ಗರಿಕೆ ಹುಲ್ಲು ಎಷ್ಟೋ ಔಷಧೀಯ ಗುಣಗಳನ್ನು ಹೊಂದಿದೆ ಆದ್ದರಿಂದಲೇ ಈ ಹುಲ್ಲಿನ ಜಾತಿಯನ್ನು ಸಹ ಸಮುದ್ರದ ಗರಿಕೆ ಎನ್ನಬೇಕೆನ್ನಿಸಿತು.

ಸಮುದ್ರದ ಹುಲ್ಲು ಅಲ್ಲಿನ ನೀರನ್ನು ಶುಚಿಗೊಳಿಸುವುದು ರಹಸ್ಯದ ವಿಷಯವೇನಲ್ಲ, ಸಮುದ್ರಕ್ಕೆ ಹರಿದು ಬರುವ ರಂಜಕ ಹಾಗೂ ಸಾರಜನಕಗಳಂತಹ ಹಾನಿಕಾರಕ ವಸ್ತುಗಳನ್ನು ಶುಚಿ ಮಾಡುತ್ತವೆ ಆದರೆ ಈ ಹುಲ್ಲು ಸಮುದ್ರಕ್ಕೆ ಹರಿದು ಬರುವ ಎಷ್ಟೋ ಹಾನಿಕಾರಕ ಬಾಕ್ಟೀರಿಯಾಗಳನ್ನು ಕೊಂದು ಸಮುದ್ರದ



ನೀರನ್ನು ಶುಚಿಯಾಗಿಡುವುದರ ಮೂಲಕ ಅಲ್ಲಿನ ಹವಳಗಳನ್ನು ಹಾಗೂ ಮೀನುಗಳು ಆರೋಗ್ಯವಾಗಿರುವಲ್ಲಿ ಸಹಾಯ ಮಾಡುತ್ತವೆ ಎನ್ನುತ್ತಾರೆ ಕಾರ್ನೆಲ್ ಯೂನಿವರ್ಸಿಟೀಯ(Cornel University) ಲ್ಯಾಂಬ್(Lamb) ಮತ್ತು ಅವರ ಸಂಗಡಿಗರು.





ಇವರಿಗೆ ಇದೆಲ್ಲ ಹೇಗೆ ಗೊತ್ತು? ಇವನ್ನೆಲ್ಲ ಹೇಗೆ ನಂಬುವುದು? ಅನ್ನಿಸುತ್ತದೆ ಅಲ್ಲವೇ.....! ನಿಜ.

ಅದಕ್ಕೆ ತಕ್ಕ ಉತ್ತರವೂ ಇಲ್ಲಿದೆ. ಲ್ಯಾಂಬ್ ಮತ್ತು ಸಂಗಡಿಗರು ಇಂಡೋನೇಶಿಯಾದ ಸುತ್ತ ಮುತ್ತಲಿನ ಹೆಚ್ಚು ಜನಸಂಖ್ಯೆಯುಳ್ಳ ದ್ವೀಪಗಳಿಂದ ಸಮುದ್ರಕ್ಕೆ ಬಿಡುವ ಚರಂಡಿ ತ್ಯಾಜ್ಯದ ಪ್ರದೇಶಕ್ಕೆ ಹೋಗಿ ಅಲ್ಲಿನ ನೀರನ್ನು ತೆಗೆದು ಪರೀಕ್ಷಿಸಿದ್ದಾರೆ. ಅವುಗಳ ಫಲಿತಾಂಶವನ್ನೇ ನಮಗೆ ತಿಳಿಸಿದ್ದಾರೆ. ಅದು ಸಾಲದು ಎಂದುಕೊಳ್ಳುವವರಿಗೆ ಇಲ್ಲಿ ಇನ್ನೊಂದು ವಿಷಯವಿದೆ. ಲ್ಯಾಂಬ್ ಮತ್ತು ಸಂಗಡಿಗರಿಗೆ ಅಲ್ಲಿ ಸಂಶೋಧನೆಗೆಂದು ಹೋಗಿದ್ದಾಗ ಹೇಗೋ ಅಲ್ಲಿನ ಎಂಟೆರೋಕೊಕ್ಕುಸ್ ಬಾಕ್ಟೀರಿಯಾಗಳು(Enterococcus bacteria) ಅವರಿಗೆ ಡಯೆರಿಯನ್ನು ಕೂಡ ತಂದಿದ್ದವಂತೆ. ಹಾಗೂ ಇಲ್ಲಿನ ಈ ಬ್ಯಾಕ್ಟೀರಿಯಗಳ ಸಂಖ್ಯೆ ಬೇರೆ ಸಮುದ್ರ ತೀರದ ಈ ಗರಿಕೆಗಳು ಇಲ್ಲದ ಪ್ರದೇಶಗಳಿಗಿಂತ 20 ಪಟ್ಟು ಹೆಚ್ಚಿದ್ದವಂತೆ. ಹಾಗಾದರೆ ಇಂತಹ ಗರಿಕೆಗಳ ಪ್ರಾಮುಖ್ಯತೆ ಎಷ್ಟಿರಬಹುದು ಅಲ್ಲವೇ?

ಆದರೆ ದುಸ್ಥಿತಿ ಎಂದರೆ ಇವುಗಳ ಸಂಖ್ಯೆಯು ಸಹ ವರ್ಷಕ್ಕೆ 7% ಕಡಿಮೆಯಾಗುತ್ತಲೇ ಇವೆಯಂತೆ, ಇದಕ್ಕೆ ಕಾರಣ! ನಮಗೆ ತಿಳಿದಿರುವಂತೆ ಪ್ರಪಂಚದ ಪೀಡೆ " ಪರಿಸರ ಮಾಲಿನ್ಯ" ಮತ್ತು "ಆವಾಸಸ್ಥಾನದ ನಷ್ಟ(Habitat Loss)"ವೇ. ಹಾಗಾದರೆ ನಾವೇನು ಮಾಡಬಹುದು? ಒಮ್ಮೆ ಯೋಚಿಸಿ ನೋಡಿ...!

ಅವುಗಳನ್ನು ನಾವೇನು ಸಮುದ್ರ ತೀರಕ್ಕೆ ಹೋಗಿ ನೆಟ್ಟು ಪೋಷಿಸಬೇಕಿಲ್ಲ, ದುಡ್ಡು ಖರ್ಚು ಮಾಡಿ ಏನೂ ಮಾಡಬೇಕಿಲ್ಲ. ಮಾಡಬೇಕಾದದ್ದು ಒಂದೇ. ನಾವೂ ಪರಿಸರ ಸರಿಪಡಿಸಬೇಕಿಲ್ಲ. ನಾವು ಸರಿ ಹೋದರೆ ಸಾಕು. ಅಂದರೆ ನಾವು ಈ ಪರಿಸರ ಮಾಲಿನ್ಯಕ್ಕೆ ಕೊಡುತ್ತಿರುವ ಚಿಕ್ಕ ಚಿಕ್ಕ ಕೊಡುಗೆಗಳನ್ನು ಅರಿತು ಸರಿ ಪಡಿಸಿಕೊಂಡರೆ ಸಾಕು. ಆ ಪ್ರಯತ್ನ ಇಂದಿನಿಂದಲೇ ಶುರುವಾಗಲಿ....;)



**- ಜೈಕುಮಾರ್ .ಆರ್**



# ಮೊಡಗಳು

ಆಕಾಶದ ಕಡಲಲ್ಲಿ ಅಲೆಯುತಿಹ
ಮೋಡಗಳು
ವಿಶ್ವ ಸುಂದರಿಯಂತೆ ಮಿನುಗುವುದೇಕೆ..?
ಕತ್ತಲೆಯ ಕಾರ್ಮುಗಿಲು ಗುಡು-ಗುಡಿಸಿ ಮಳೆತಂದು
ಆಗೊಮ್ಮೆ ಈಗೊಮ್ಮೆ ನಿಲ್ಲುವುದೇಕೆ...?
ಸೂರ್ಯನನೇ ಮರೆಮಾಡಿ
ತಂಪುಗಾಳಿ ಬರಮಾಡಿ
ದೂರಾತಿ ದೂರಕ್ಕೆ ಸರಿಯುವುದೇಕೆ..?
ಬಿರು ಬಿಸಿಲ ಝಳ ಮುಗಿದು ಮುಂಗಾರಿನ ಆರಂಭಕ್ಕೆ
ನಿನ್ನ ನೋಡಿ ಕಪ್ಪೆಗಳು ಕೂಗುವುದೇಕೆ...?
ಪುಟ್ಟ ಮನದ ಹೃದಯದಲ್ಲಿ ಎಷ್ಟು ದೊಡ್ಡ ಬೆಣ್ಣೆಯೆಂದು ಅಮ್ಮನನ್ನು ಕರೆಯುವಂತೆ ಮಾಡುವಿಯೇಕೆ...?
ಆಗಸದಿ ನಿನ್ನ ಆಟ ರೈತನಿಗೆ ವಿಧಿಯ ಪಾಠ ಯಾವ ರೀತಿ ಕಲಿಸಲೆಂದು
ನೋಡುವಿಯೇಕೆ...?
ಗಿಡಗಳೆಲ್ಲಾ ಸೊರಗಿನಿಂತು ಭೂಮಿಯೆಲ್ಲಾ ಬರಡಾಗಿ ನೀರಿಗಾಗಿ ಬೇಡುವಾಗ ಓಡುವಿಯೇಕೆ ಮೋಡ ನೀ
ಓಡುವಿಯೇಕೆ..?

- ನಂದಕುಮಾರ್ ಹೊಳ್ಳ.

ನಂದಕುಮಾರ್ ಹೊಳ್ಳ (ಕಾವ್ಯನಾಮ-ಪಾನಂ), ಅರ್ಥಶಾಸ್ತ್ರ ಉಪನ್ಯಾಸಕರು, ಇವರು ಮೂಲತಹ ಉಡಪಿ ಜಿಲ್ಲೆಯ ಪಾಂಡೇಶ್ವರ ಗ್ರಾಮದವರು, ಪರಿಸರ ಕುರಿತ ಹಲವು ಕವನಗಳನ್ನು ರಚಿಸಿದ್ದಾರೆ.



ಒಂದು ಆನೆಯು ದಿನನಿತ್ಯ ಹದಿನಾರರಿಂದ ಹದಿನೆಂಟು ಗಂಟೆಗಳ ಕಾಲ ಸುಮಾರು ದಿನದ 80% ರಷ್ಟು ಸಮಯವನ್ನು ಆಹಾರ ಹುಡುಕಿ ತಿನ್ನುವುದರಲ್ಲಿ ಕಳೆಯುತ್ತದೆ. ಪ್ರತಿದಿನ ನೂರರಿಂದ ಮೂನ್ನೂರು ಕಿ.ಲೋ. ಗಳಷ್ಟು ಆಹಾರ ಬೇಕಾಗುತ್ತದೆ. ಆನೆಗಳು ಸಣ್ಣ ಸಸ್ಯಗಳು, ಪೊದೆಗಳು, ಹಣ್ಣು, ಕೊಂಬೆಗಳನ್ನು, ಮರದ ತೊಗಟೆ, ಬೇರುಗಳು ಮತ್ತು ಪ್ರಧಾನವಾಗಿ ಹುಲ್ಲನ್ನು ತಿನ್ನುತ್ತವೆ. ಈ ಹಸಿರ ಹುಲ್ಲು ಬೇಸಿಗೆಗೆ ಒಣಗಿ ಹೋಗಿ ಪೌಷ್ಠಿಕವಾದ ಆಹಾರ ಸಿಗಲಾರದು. ಬೇಸಿಗೆಯಲ್ಲಿ ಕಾಡುಗಳಿಗೆ ಬೆಂಕಿ ಬಿದ್ದರೆ ಅಂತೂ ಮುಗಿಯಿತು...!, ಈ ಕಾಳ್ಗಿಚ್ಚಿನಿಂದ ಸಸ್ಯಾಹಾರಿ ಪ್ರಾಣಿಗಳಿಗೆ ಅತಿ ನಿರ್ದಯ ಆತಂಕವೂ ಕೂಡ.



ಈ ನಮ್ಮ ನಾಡಿನಲ್ಲಿ ಎಥೇಚ್ಚವಾಗಿ ಹುಲ್ಲುಗಾವಲಿನಿಂದ ಕೂಡಿದ ಕಾಡುಗಳೇ ಹೆಚ್ಚು... ಇಂತಹ ಕಾಡುಗಳಿಗೆ ಬೆಂಕಿ ಬಿದ್ದರೆ...! ಈ ಹಸಲೆಗಳಲ್ಲಿರುವ ಕೋಟ್ಯಾಂತರ ಮಿಡತೆಯಂತಹ ಕೀಟಗಳ ಆವಾಸಗಳಿಗೆ ಕಂಟಕ. ಇದು ಈ ಪರಿಸರದಲ್ಲಿನ ಅಸಮತೋಲನೆಗೆ ಕಾರಣವೂ ಕೂಡ.




ಬಿದಿರು ಕಾಡುಗಳು ಇರುವಲ್ಲಿ ಈ ಬಿದಿರು ಮಂಡಲ ಹಾವುಗಳು ಹೆಚ್ಚಾಗಿ ಕಂಡುಬರುತ್ತವೆ. ಬಿದಿರು ಕಾಡುಗಳೇ ಈ ಬೆಂಕಿಗೆ ಆಹುತಿಯಾದರೇ...? ನೂರಾರು ಹಾವುಗಳ, ಮೊಟ್ಟೆಗಳ, ಮರಿಗಳ ಆವಾಸಗಳನ್ನು ನಾಶಮಾಡಲು ಹೊರಟ್ಟಿದ್ದಾನೆ ಈ ಮನುಷ್ಯ....!



ಇಂದು ಜಗತ್ತಿನಾದ್ಯಂತ ಕಪ್ಪೆಗಳ ಸಂಖ್ಯೆಯಲ್ಲಿ ಅಭೂತಪೂರ್ವವಾಗಿ ಕ್ಷೀಣಿಸುತ್ತಿವೆ ಮತ್ತು ಉಭಯವಾಸಿಗಳು ವಿಶ್ವದ ಮೂರನೇ ಒಂದು ಭಾಗದಷ್ಟು ಅಳಿವಿನಂಚಿನಲ್ಲಿರುವ ಪ್ರಭೇದಗಳಾಗಿವೆ. ಈ ಭೂಮಿಯ ಮೇಲೆ 1980 ರಿಂದೀಚೆಗೆ 200 ಜಾತಿಯ ಉಭಯವಾಸಿಗಳು ಮಾಯವಾಗಿವೆ. ಇದಕ್ಕೆ ಕಾಡ್ಗಿಚ್ಚಿನಂತಹ ಆವಾಸ ನಾಶವೂ ಕೂಡ ಕಾರಣ ಇರಬಹುದು, ಹಾಗೂ ಸಾಂಕ್ರಾಮಿಕ ರೋಗಗಳು, ಹವಾಮಾನ ಬದಲಾವಣೆ, ಪರಿಸರದ ಮಾಲಿನ್ಯಗಳಿಂದ ಅವನತಿಯ ದಾರಿಯನ್ನು ಹಿಡಿದಿವೆ.

**- ಕಾರ್ತಿಕ್ .ಎ .ಕೆ**

